# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀಮತಿ ಎಸ್.ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **98** |
| ಉತ್ತರಿಸಬೇಕಾದ ದಿನಾಂಕ | : | 16.02.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ವಿವಿಧ ವಸತಿ ಯೋಜನೆಗಳಡಿ ಎಷ್ಟು ಮನೆಗಳು ಮಂಜೂರಾಗಿವೆ; (ವರ್ಷವಾರು ವಿವರ ನೀಡುವುದು) | ಕೊಡಗು ಜಿಲ್ಲೆಗೆ ಕಳೆದ ಮೂರು ವರ್ಷಗಳಲ್ಲಿ ವಿವಿಧ ವಸತಿ ಯೋಜನೆಗಳಡಿ 144 ಮನೆಗಳನ್ನು ಮಂಜೂರು ಮಾಡಲಾಗಿದೆ. ಈ ಮನೆಗಳ ಪೈಕಿ 4 ಮನೆಗಳು ಪೂರ್ಣಗೊಂಡಿದ್ದು, 20 ಮನೆಗಳು ವಿವಿಧ ಹಂತದಲ್ಲಿ ಪ್ರಗತಿಯಲ್ಲಿದ್ದು, 114 ಮನೆಗಳು ಪ್ರಾರಂಭವಾಗಬೇಕಿರುತ್ತದೆ ಹಾಗೂ 6 ಮನೆಗಳು ವಿವಿಧ ಕಾರಣಗಳಿಂದ ರದ್ದಾಗಿರುತ್ತದೆ. ವರ್ಷವಾರು ವಿವರ ಕೆಳಕಂಡಂತಿದೆ. |
| ಆ) | ಸದರಿ ವರ್ಷಗಳಲ್ಲಿ ಮಂಜೂರಾಗಿರುವ ಮನೆಗಳ ನಿರ್ಮಾಣದ ಪ್ರಗತಿಯ ವಿವರಗಳೇನು; | (ಕೆಳಗಿನ ಕೋಷ್ಟಕ) |

| ಯೋಜನೆ | ವರ್ಷ | ಮಂಜೂರಾದ ಮನೆಗಳು | ಪೂರ್ಣಗೊಂಡ ಮನೆಗಳು | ಪ್ರಗತಿಯಲ್ಲಿರುವ ಮನೆಗಳು | ಪ್ರಾರಂಭವಾಗದ ಮನೆಗಳು | ಬ್ಲಾಕ್ ಆದ ಮನೆಗಳು |
|---|---|---|---|---|---|---|
| ಬಸವ ವಸತಿ | 2018-19 | 6 | 0 | 0 | 0 | 6 |
| ದೇವರಾಜ್ ಅರಸು (ಗ್ರಾ) | 2020-21 | 4 | 0 | 0 | 4 | 0 |
| ಪ್ರಧಾನ ಮಂತ್ರಿ ಆವಾಸ್ (ಗ್ರಾ) | 2019-20 | 2 | 1 | 1 | 0 | 0 |
| ಪ್ರಧಾನ ಮಂತ್ರಿ ಆವಾಸ್ ನಗರ | 2019-20 | 124 | 3 | 19 | 102 | 0 |
| | 2020-21 | 8 | 0 | 0 | 8 | 0 |
| **ಒಟ್ಟು** | | **144** | **4** | **20** | **114** | **6** |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಇ) | ಸದರಿ ಮನೆಗಳ ನಿರ್ಮಾಣಕ್ಕೆ ಮಂಜೂರಾಗಿರುವ, ಬಿಡುಗಡೆಯಾಗಿರುವ ಹಾಗೂ ಬಾಕಿ ಇರುವ ಅನುದಾನದ ವಿವರಗಳೇನು; | ಕೊಡಗು ಜಿಲ್ಲೆಗೆ 2018-2019 ರಿಂದ ಜನವರಿ 2022 ರ ಅಂತ್ಯಕ್ಕೆ ವಿವಿಧ ವಸತಿ ಯೋಜನೆಗಳಡಿ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಗೆ ಅನುಗುಣವಾಗಿ ಫಲಾನುಭವಿಗಳ ಖಾತೆಗೆ ರೂ.37.63 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br><br>ವಿವಿಧ ಯೋಜನೆಗಳಡಿ ಅನುದಾನ ದುರ್ಬಳಕೆಯನ್ನು ತಡೆಹಿಡಿಯುವ ಉದ್ದೇಶದಿಂದ ಸರ್ಕಾರವು ಆದೇಶ ಸಂಖ್ಯೆ:ವಇ 154 ಹೆಚ್‌ಎಹೆಚ್ 2019, ದಿನಾಂಕ:16.11.2019 ರಲ್ಲಿ ಮನೆಗಳ ಪ್ರಗತಿಯನ್ನು ಜಿಯೋ ಆಧಾರಿತ "ವಿಜಿಲ್ ಆಪ್" ಮೂಲಕ ಜಿಲ್ಲಾಧಿಕಾರಿಗಳು/ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮೂಲಕ ಪುನರ್ ಪರಿಶೀಲಿಸಿ, ಅರ್ಹ ಫಲಾನುಭವಿಗಳಿಗೆ ಅನುದಾನ ಬಿಡುಗಡೆಗೆ ಕ್ರಮ ವಹಿಸಲಾಗುತ್ತಿತ್ತು. ಇದರಿಂದ ಫಲಾನುಭವಿಗಳಿಗೆ ಅನುದಾನ ಬಿಡುಗಡೆಯು ವಿಳಂಬವಾಗುತ್ತಿರುವುದನ್ನು ಸರ್ಕಾರವು ಮನಗಂಡು ಆದೇಶ ಸಂಖ್ಯೆ:ವಇ 75 ಹೆಚ್‌ಎಹೆಚ್ 2021, ದಿನಾಂಕ: 07.09.2021 ರಲ್ಲಿ ವಿಜಿಲ್ ಆಪ್ ಮೂಲಕ ಮನೆಗಳ ಪ್ರಗತಿಯನ್ನು ಪ್ರತ್ಯೇಕವಾಗಿ ಪರಿಶೀಲಿಸುವುದನ್ನು ಮತ್ತಷ್ಟು ಸರಳೀಕರಿಸಿ In-House ಮೂಲಕ ಅಭಿವೃದ್ಧಿ ಪಡಿಸಿರುವ "Indira-Vigil" ವೆಬ್ ಆಪ್ |

<table>
<tr>
<td></td>
<td></td>
<td>ಮೂಲಕ ಪರಿಶೀಲಿಸಿದ ನಂತರ ಅನುದಾನ ಬಿಡುಗಡೆ ಅನುಮತಿ ನೀಡಿರುತ್ತದೆ. ಅದರಂತೆ ವಿವಿಧ ವಸತಿ ಯೋಜನೆಗಳಡಿ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಗೆ ಅನುಗುಣವಾಗಿ ಫಲಾನುಭವಿಗಳಿಗೆ ಯಾವುದೇ ವಿಳಂಬವಾಗದಂತೆ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ನೇರವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಭೌತಿಕ ಪ್ರಗತಿಗನುಗುಣವಾಗಿ ಆಧಾರ್ ಜೋಡಣೆಗೊಂಡ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡಲು ಬಾಕಿ ಇರುವುದಿಲ್ಲ.</td>
</tr>
<tr>
<td>ಈ)</td>
<td>ಪ್ರಸ್ತುತ ಆರ್ಥಿಕ ವರ್ಷದಲ್ಲಿ ವಿವಿಧ ವಸತಿ ಯೋಜನೆಗಳಡಿ ಜಿಲ್ಲೆಗೆ ದೊರಕಿರುವ ಮನೆಗಳ ಸಂಖ್ಯೆ ಹಾಗೂ ಮಂಜೂರಾಗಿರುವ ಮತ್ತು ಬಿಡುಗಡೆಯಾಗಿರುವ ಅನುದಾನ ವಿವರಗಳೇನು ?</td>
<td>ಸರ್ಕಾರದ ಆದೇಶ ಸಂಖ್ಯೆ: ವಇ 44 ಹೆಚ್ ಎಹೆಚ್ 2021, (ಭಾಗ-1), ದಿನಾಂಕ :16.12.2021 ರಲ್ಲಿ 2021-22 ನೇ ಸಾಲಿನಲ್ಲಿ ಗ್ರಾಮೀಣ ಪ್ರದೇಶಕ್ಕೆ 4 ಲಕ್ಷಗಳ ಮನೆಗಳ ಗುರಿಯನ್ನು ಹಾಗೂ ನಗರ ಪ್ರದೇಶಕ್ಕೆ 1 ಲಕ್ಷ ಮನೆಗಳ ಗುರಿಯನ್ನು ನಿಗದಿಪಡಿಸಿ ಆದೇಶಿಸಲಾಗಿದೆ. ಮುಂದುವರೆದು, ಸರ್ಕಾರದ ಆದೇಶ ಸಂಖ್ಯೆ: ವಇ 44 ಹೆಚ್ ಎಹೆಚ್ 2021(ಭಾಗ-2), ದಿನಾಂಕ :31.12.2021 ರಲ್ಲಿ ಗ್ರಾಮ ಪಂಚಾಯತಿ/ನಗರ ಸ್ಥಳೀಯ ಸಂಸ್ಥೆವಾರು ಹಂಚಿಕೆ ಮಾಡಿ ಆದೇಶಿಸಲಾಗಿದೆ.<br><br>
ಅದರಂತೆ 2021-22ನೇ ಸಾಲಿನಲ್ಲಿ ಕೊಡಗು ಜಿಲ್ಲೆಗೆ ವಿವಿಧ ವಸತಿ ಯೋಜನೆಗಳಡಿ 3660 ಮನೆಗಳನ್ನು ಮಂಜೂರು ಮಾಡಲಾಗಿದ್ದು, ಯೋಜನಾವಾರು ವಿವರ ಕೆಳಕಂಡಂತಿದೆ.<br><br>
<table>
<tr><th>ಯೋಜನೆ</th><th>ಮಂಜೂರಾದ ಮನೆಗಳು</th></tr>
<tr><td>ಬಸವ ವಸತಿ</td><td>2596</td></tr>
<tr><td>ಡಾ. ಬಿ.ಆರ್. ಅಂಬೇಡ್ಕರ್ ನಿವಾಸ್ (ಗ್ರಾಮೀಣ)</td><td>814</td></tr>
<tr><td>ವಾಜಪೇಯಿ ನಗರ ವಸತಿ</td><td>190</td></tr>
<tr><td>ಡಾ. ಬಿ.ಆರ್. ಅಂಬೇಡ್ಕರ್ ನಿವಾಸ್ (ನಗರ)</td><td>60</td></tr>
<tr><td>ಒಟ್ಟು</td><td>3660</td></tr>
</table><br>
ಮೇಲ್ಕಂಡ ಯೋಜನೆಗಳಡಿ ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ ಪ್ರಗತಿಯಲ್ಲಿದೆ. ಸರ್ಕಾರವು ಆಯವ್ಯಯದಲ್ಲಿ ಘೋಸಿಸಲಾದ ಮನೆಗಳಿಗೆ ಅದೇ ವರ್ಷ ಅನುದಾನವನ್ನು ಒದಗಿಸದೇ ವರ್ಷಾವಾರು ಅನುದಾನವನ್ನು ಒದಗಿಸಲಾಗುತ್ತಿದ್ದು, ಅದರಂತೆ ಪ್ರತಿ ವರ್ಷ ಜಿಲ್ಲಾವಾರು/ತಾಲ್ಲೂಕವಾರು/ವಿಧಾನ ಸಭಾ ಕ್ಷೇತ್ರವಾರು ಅನುದಾನವನ್ನು ಒದಗಿಸದೇ ಒಟ್ಟಾರೆಯಾಗಿ ಯೋಜನಾವಾರು ಒದಗಿಸಿ ಬಿಡುಗಡೆ ಮಾಡಲಾಗುತ್ತಿದೆ. ಪ್ರಸಕ್ತ ಆರ್ಥಿಕ ವರ್ಷದಲ್ಲಿ ಹಿಂದಿನ ಶ್ರೇಣಿಗಳನ್ನು ಒಳಗೊಂಡಂತೆ ಕೊಡಗು ಜಿಲ್ಲೆಗೆ ವಿವಿಧ ವಸತಿ ಯೋಜನೆಗಳಡಿ ರೂ.4.33 ಕೋಟಿಗಳು ಬಿಡುಗಡೆ ಮಾಡಲಾದ ಅನುದಾನದ ವಿವರ ಕೆಳಕಂಡಂತಿದೆ.<br><br>
(ರೂ.ಕೋಟಿಗಳಲ್ಲಿ)
<table>
<tr><th>ಯೋಜನೆ</th><th>ಬಿಡುಗಡೆ ಮಾಡಲಾದ ಮೊತ್ತ</th></tr>
<tr><td>ಬಸವ ವಸತಿ ಯೋಜನೆ</td><td>2.78</td></tr>
</table></td>
</tr>
</table>

| | | | | | |
|---|---|---|---|---|---|
| | | | ಡಾ. ಬಿ.ಅರ್.ಅಂಬೇಡ್ಕರ ನಿವಾಸ್ ಯೋಜನೆ | 0.66 | |
| | | | ಡಿ.ದೇವರಾಜ್ ಅರಸು ಯೋಜನೆ | 0.04 | |
| | | | ವಾಜಪೇಯಿ ನಗರ ವಸತಿ ಯೋಜನೆ | 0.03 | |
| | | | ಪ್ರಧಾನ ಮಂತ್ರಿ ಅವಾಸ್ – ಗ್ರಾಮೀಣ | 0.02 | |
| | | | ಪ್ರಧಾನ ಮಂತ್ರಿ ಅವಾಸ್ – ನಗರ | 0.80 | |
| | | | ಒಟ್ಟು | 4.33 | |

ಸಂಖ್ಯೆ :ವಇ 27 ಹೆಚ್‌ಎಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು